

**ಕರ್ನಾಟಕ ವಿಧಾನ ಪರಿಷತ್ತು**

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 258(358)
ಸದಸ್ಯರ ಹೆಸರು : ಕೆ.ಹರೀಶ್ ಕುಮಾರ್ (ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 15/12/2021 (ಕಂದಾಯ ಇಲಾಖೆಯಿಂದ ವರ್ಗಾವಣೆಗೊಂಡ ಪ್ರಶ್ನೆ)
ಉತ್ತರಿಸುವವರು : ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು.

| ಕ್ರ.ಸ | ಪ್ರಶ್ನೆ | ಉತ್ತರ |
|---|---|---|
| ಅ) | ನಗರ ಪಂಚಾಯತ್/ಪಟ್ಟಣ ಪಂಚಾಯತ್, ಪುರಸಭೆ ವ್ಯಾಪ್ತಿಯ ಜಾಗ ಮತ್ತು ಗ್ರಾಮ ಪಂಚಾಯತ್ ವ್ಯಾಪ್ತಿಯ ಜಾಗವನ್ನು ನಮೂನೆ-9 ಮತ್ತು 11 ಎ ಯ ಆಧಾರದಲ್ಲಿ ಅದಲು-ಬದಲು ಮಾಡಿಕೊಂಡಲ್ಲಿ ಇ-ಸ್ವತ್ತು ತಂತ್ರಾಂಶದಲ್ಲಿ ಖಾತಾ ಬದಲಾವಣೆಗೆ ಅವಕಾಶ ಕಲ್ಪಿಸದೇ ನೂರಾರು ಮಂದಿಗೆ ತೊಂದರೆಯಾಗಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬಂದಿದೆ. |
| ಆ) | ಬಂದಿದ್ದಲ್ಲಿ, ಸದರಿ ಸಮಸ್ಯೆಯನ್ನು ಪರಿಹರಿಸುವ ನಿಟ್ಟಿನಲ್ಲಿ ಅನುಸರಿಸಬೇಕಾದ ಕ್ರಮಗಳೇನು? | ನಗರ ಸ್ಥಳೀಯ ಸಂಸ್ಥೆ ವ್ಯಾಪ್ತಿಯ ಜಾಗ ಮತ್ತು ಗ್ರಾಮ ಪಂಚಾಯತಿ ವ್ಯಾಪ್ತಿಯ ಜಾಗವನ್ನು ಅದಲು-ಬದಲು ಮಾಡಿಕೊಂಡಲ್ಲಿ ಖಾತಾ ಬದಲಾವಣೆಗೆ ಇ-ಆಸ್ತಿಯ ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲು ಪೌರಾಡಳಿತ ನಿರ್ದೇಶನಾಲಯದಿಂದ ದಿ:04.11.2020 ರಲ್ಲಿ National Informatics Centre, Karnataka ಇವರಿಗೆ ಪತ್ರ ಬರೆದು ದಿ:08.10.2020 ರಂದು ನಡೆದ ಗ್ರಾಮೀಣ ಅಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆಯ ಸಭೆಯ ನಡವಳಿಯಂತೆ ನಗರ ಸ್ಥಳೀಯ ಸಂಸ್ಥೆ ಮತ್ತು ಗ್ರಾಮ ಪಂಚಾಯತಿ ವ್ಯಾಪ್ತಿಯಲ್ಲಿನ ಆಸ್ತಿಗಳನ್ನು ಅದಲು ಬದಲು ಪತ್ರ ಮಾಡಿಕೊಂಡಲ್ಲಿ ಇ-ಆಸ್ತಿ ತಂತ್ರಾಂಶದಲ್ಲಿ ಹಕ್ಕು ವರ್ಗಾವಣೆಗೆ ಅವಕಾಶ ಕಲ್ಪಿಸುವಂತೆ ಕೋರಲಾಗಿರುತ್ತದೆ. ಹಾಗೂ ಎಲ್ಲಾ ರೀತಿಯ ಆಸ್ತಿ ಹಕ್ಕು ವರ್ಗಾವಣೆ ವಿಧಗಳನ್ನು ಕಾವೇರಿ ತಂತ್ರಾಂಶದೊಂದಿಗೆ ಜೋಡಣೆಯಾಗುವಂತೆ ಇ-ಆಸ್ತಿ ತಂತ್ರಾಂಶದಲ್ಲಿ ಅವಕಾಶ ಕಲ್ಪಿಸಲು ಕೋರಲಾಗಿರುತ್ತದೆ. |

ಸಂಖ್ಯೆ: ನಅಇ 283 ಜಿಇಎಲ್ 2021(ಇ)

(ಸಹಿ)
ಎನ್. ನಾಗರಾಜು (ಎಂ.ಟಿ.ಬಿ)
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು